# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2016
ಸದಸ್ಯರ ಹೆಸರು : ಶ್ರೀ ಆರ್.ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸುವ ದಿನಾಂಕ : 27.03.2020
ಉತ್ತರಿಸುವವರು : ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಗ್ರಾಮ ಪಂಚಾಯತಿ ಗ್ರಂಥಾಲಯವು ಕಾರ್ಯನಿರ್ವಹಿಸುತ್ತಿರುವ 8 ಗಂಟೆ ಅವಧಿಯನ್ನು 4 ಗಂಟೆಗೆ ಇಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸಮಯವನ್ನು ಇಳಿಕೆ ಮಾಡಲು ಕಾರಣವೇನು; (ವಿವರ ನೀಡುವುದು) | ಬಂದಿದೆ.<br><br>ಗ್ರಾಮೀಣ ಗ್ರಂಥಾಲಯಗಳ ಕೆಲಸದ ಅವಧಿಯನ್ನು ಮೊದಲಿನಂತೆ ಬೆಳಿಗ್ಗೆ 9.00 ರಿಂದ 12.30 ಗಂಟೆಯವರೆಗೆ ಹಾಗೂ ಸಾಯಂಕಾಲ 3.00 ರಿಂದ 6.00 ರವರೆಗೆ ಮುಂದುವರೆಸುವಂತೆ ಕೋರಿ ಸಾರ್ವಜನಿಕರಿಂದ ಬಂದ ಮನವಿಗಳನುಸಾರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಗ್ರಾಮ ಪಂಚಾಯಿತಿ ಗ್ರಂಥಾಲಯಗಳು ಗ್ರಾಮ ಪಂಚಾಯಿತಿ ಕೇಂದ್ರದಲ್ಲಿ ನಡೆಯುತ್ತಿರುವುದರಿಂದ ದಿನದ 8.00 ಗಂಟೆಗಳು ಓದುಗರು ಗ್ರಂಥಾಲಯಕ್ಕೆ ಬರುವ ಸಾಧ್ಯತೆ ಕಡಿಮೆ ಇರುವುದರಿಂದ ಪ್ರಸ್ತುತ ಇರುವ 4.00 ಗಂಟೆಗಳ ಕಾರ್ಯಾವಧಿಯನ್ನು ಮುಂದುವರೆಸಲಾಗಿರುತ್ತದೆ. |
| (ಆ) | ಕರ್ನಾಟಕ ವಿಶೇಷ ರಾಜ್ಯ ಪತ್ರದಲ್ಲಿ ದಿನಾಂಕ: 06.08.2016 ರಲ್ಲಿ ಪ್ರಕಟವಾಗಿರುವಂತೆ ರಾಜ್ಯದ ಗ್ರಾಮ ಪಂಚಾಯತಿ ಗ್ರಂಥಾಲಯದ ಮೇಲ್ವಿಚಾರಕರಿಗೆ ಕನಿಷ್ಠ ವೇತನ ನೀಡುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಬಂದಿದೆ.<br><br>ಸಾರ್ವಜನಿಕ ಗ್ರಂಥಾಲಯ ಇಲಾಖೆಯಲ್ಲಿ ಗ್ರಾಮ ಪಂಚಾಯತಿ ಗ್ರಂಥಾಲಯಗಳಲ್ಲಿ ಗೌರವಧನ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮೇಲ್ವಿಚಾರಕರಿಗೆ ಕನಿಷ್ಠ ವೇತನವನ್ನು ಜಾರಿಗೊಳಿಸಿ ಕಾರ್ಮಿಕ ಇಲಾಖೆ ಅಧಿಸೂಚನೆ ಸಂ : ಕಾಇ 71 ಎಲ್‌ಡಬ್ಲ್ಯೂಎ 2015 ದಿನಾಂಕ : 05-08-2016 ರನ್ವಯ ಕ್ರ.ಸಂ.1 ರಲ್ಲಿ ಗ್ರಂಥಪಾಲಕ/ಗ್ರಂಥಾಲಯ ಮೇಲ್ವಿಚಾರಕರುಗಳಿಗೆ ಮಾಸಿಕ ದರಗಳನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳಲ್ಲಿ ರೂ.14,630/- ರಂತೆ ಹಾಗೂ ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್-1) ರೂ.14,190/- ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್-2) ಹಾಗೂ ಪುರಸಭೆಗಳು ರೂ.13,761/- ಹಾಗೂ ರಾಜ್ಯದ ಎಲ್ಲಾ ಪಟ್ಟಣ ಪಂಚಾಯತಿ ಹಾಗೂ ಗ್ರಾಮ ಪಂಚಾಯತಿಗಳಿಗೆ ರೂ.13,200/- ರಂತೆ ಪರಿಷ್ಕರಿಸಿ ಹೊರಡಿಸಲಾದ ಆದೇಶವನ್ನು ಈ ಕೆಳಕಾಣಿಸಿದ ಅಂಶಗಳ ಮೇರೆಗೆ ಅಧಿಸೂಚನೆಯನ್ನು ಹಿಂಪಡೆಯಲಾಗಿರುತ್ತದೆ.<br><br>1. ಸರ್ಕಾರದ ಅಧಿಸೂಚನೆ ಸಂ : ಕಾಇ 85 ಎಲ್‌ಡಬ್ಲ್ಯೂಎ 2017 ದಿ : 04-09-2017 ರಲ್ಲಿ ಮೇಲೆ ಹೇಳಲಾದ ಸರ್ಕಾರದ ಅಧಿಸೂಚನೆ ಸಂ : ಕಾಇ 71 ಎಲ್‌ಡಬ್ಲ್ಯೂಎ 2015 ದಿನಾಂಕ:05-08-2016 ಅಂತಿಮ ಅಧಿಸೂಚನೆ ಪಟ್ಟಿ ಸಂ.1 ರ ಗ್ರಂಥಪಾಲಕ/ಗ್ರಂಥಾಲಯ ಮೇಲ್ವಿಚಾರಕರು ಇವರಿಗೆ ಸಂಬಂಧಿಸಿದಂತೆ ಕನಿಷ್ಠ ವೇತನ ನಿಗದಿಪಡಿಸಿ ಅಧಿಸೂಚನೆ ಹೊರಡಿಸಲಾಗಿದ್ದು, ಸದರಿ ಅಧಿಸೂಚನೆಯನ್ನು ಹೊರಡಿಸುವಾಗ ಈ ಕೆಳಕಂಡ ಕ್ರಮಗಳನ್ನು/ಕಾರ್ಯ ವಿಧಾನವನ್ನು ಅನುಸರಿಸಿರುವುದಿಲ್ಲ ಎಂದು ಹೇಳಲಾಗಿದ್ದು, ಗ್ರಂಥಪಾಲಕ/ ಗ್ರಂಥಾಲಯ ಮೇಲ್ವಿಚಾರಕ ಹುದ್ದೆಯು ಬೇರೆ ಬೇರೆಯಾಗಿರುತ್ತದೆ. ಪ್ರಸ್ತಾವನೆಯನ್ನು ಅಧಿಸೂಚಿಸುವ ಪೂರ್ವದಲ್ಲಿ 1948 ರ ಕನಿಷ್ಠ ವೇತನ ಕಾಯ್ದೆಯ ಕಲಂ 5(1) (ಬಿ) ರನ್ವಯ ಬಾಧಿತರಾಗುವವರ ಮಾಹಿತಿಗಾಗಿ ಪ್ರಕಟಿಸುವುದು ಕಡ್ಡಾಯವಾಗಿರುತ್ತದೆ. ಗ್ರಂಥಾಲಯ ಮೇಲ್ವಿಚಾರಕರಿಗೆ ಸಂಬಂಧಿಸಿದಂತೆ ಇಂತಹ ಯಾವುದೇ ಪ್ರಸ್ತಾವನೆಯನ್ನು ಅಧಿಸೂಚಿಸಲಾಗಿಲ್ಲ. ಅಂದರೆ ನಿಗದಿತ ಕಾರ್ಯ ವಿಧಾನವನ್ನು ಅನುಸರಿಸಿರುವುದಿಲ್ಲ. |

| | | |
|---|---|---|
| | | 2. ಸದರಿ ಅಧಿಸೂಚನೆಯನ್ನು ಹೊರಡಿಸುವ ಪೂರ್ವದಲ್ಲಿ ಆಡಳಿತ ಇಲಾಖೆಯಾದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಇಲಾಖೆಯನ್ನು ಸಂಪರ್ಕಿಸಿ ಅವರ ಅಭಿಪ್ರಾಯ ಪಡೆದಿರುವುದಿಲ್ಲ.<br><br>3. ಗ್ರಂಥಾಲಯ ಮೇಲ್ವಿಚಾರಕರು ಗೌರವ ಸಂಭಾವನೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ.<br><br>4. ಮೇಲ್ವಿಚಾರಕರುಗಳು ಕರ್ತವ್ಯ ನಿರ್ವಹಿಸುತ್ತಿರುವ ಅವಧಿ ಮತ್ತು ನಿರ್ವಹಣೆಯ ಜವಾಬ್ದಾರಿಗನುಗುಣವಾಗಿ ನೀಡಲಾಗುವ ಒಂದು ಗೌರವ ಸಂಭಾವನೆಯಾಗಿದ್ದು, ಪೂರ್ಣ ಕಾಲಿಕ ನೌಕರರ ವ್ಯಾಪ್ತಿಗೆ ಬರುವುದಿಲ್ಲ ಹಾಗೂ ಗ್ರಾಮ ಪಂಚಾಯಿತಿ ಗ್ರಂಥಾಲಯಗಳು ಉದ್ಯಮಿ ಅಥವಾ ಕಾರ್ಖಾನೆಗಳ ವ್ಯಾಪ್ತಿಗೆ ಬರುವುದಿಲ್ಲ. ಅಲ್ಲದೆ ಇವರುಗಳನ್ನು ಕಾರ್ಮಿಕರೆಂದು ಪರಿಗಣಿಸುವುದು ಸೂಕ್ತವಾಗಿರುವುದಿಲ್ಲವೆಂಬ ಅಂಶವನ್ನು ಕಾರ್ಮಿಕ ಇಲಾಖೆಯ ಪತ್ರ ಸಂಖ್ಯೆ : ಕಾಇ 212 ಎಲ್‌ಡಬ್ಲ್ಯೂಎ 2013, ದಿನಾಂಕ : 18-12-2013 ರಲ್ಲಿ ಸ್ಪಷ್ಟಪಡಿಸಲಾಗಿರುತ್ತದೆ.<br><br>5.ಮೇಲ್ವಿಚಾರಕರುಗಳ ಕಾರ್ಯ ನಿರ್ವಹಣಾ ಅವಧಿಯು ಕೇವಲ 4 ಗಂಟೆಯಾಗಿರುವುದರಿಂದ ಕನಿಷ್ಠ ವೇತನದಡಿ ಬರುವುದಿಲ್ಲ.<br><br>6. ಗ್ರಾಮ ಪಂಚಾಯಿತಿ ಗ್ರಂಥಾಲಯ ಮೇಲ್ವಿಚಾರಕ ಹುದ್ದೆಗಳು ಮಂಜೂರಾದ ಹುದ್ದೆಗಳಾಗಿರುವುದಿಲ್ಲ. ಹಾಗೂ ಮಂಜೂರಾದ ಹುದ್ದೆಗಳ ಎದುರಿಗೆ ಕಾರ್ಯನಿರ್ವಹಿಸುತ್ತಿಲ್ಲ.<br><br>ಮೇಲೆ ತಿಳಿಸಿರುವ ಕಾರಣಗಳ ಹಿನ್ನಲೆಯಲ್ಲಿ ಕನಿಷ್ಠ ವೇತನ ಕಾಯ್ದೆ 1948 ರ ಕಲಂ 26(2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರದ ಅಧಿಸೂಚನೆ ಸಂ : ಕಾಇ 71 ಎಲ್‌ಡಬ್ಲ್ಯೂಎ 2015 ದಿನಾಂಕ :05-08-2016 ರ ಅನುಸೂಚಿಯ ಪಟ್ಟಿಯ ಕ್ರ.ಸಂ.1ರ ಗ್ರಂಥಪಾಲಕ/ಗ್ರಂಥಾಲಯ ಮೇಲ್ವಿಚಾರಕರು ಇವರಿಗೆ ಸಂಬಂಧಿಸಿದಂತೆ ಅಧಿಸೂಚನೆಯನ್ನು ಹಿಂಪಡೆಯಲಾಗಿದೆ.<br><br>ಸದರಿ ಅಂಶಗಳ ಹಿನ್ನೆಲೆಯಲ್ಲಿ ಗ್ರಾಮ ಪಂಚಾಯಿತಿ ಗ್ರಂಥಾಲಯ ಮೇಲ್ವಿಚಾರಕರಿಗೆ ಮಾಸಿಕ ರೂ.7000/-ಗಳ ಗೌರವಧನ ಪಾವತಿಸಲಾಗುತ್ತಿದ್ದು, ಕನಿಷ್ಠ ವೇತನದ ವ್ಯಾಪ್ತಿಗೆ ಸೇರದ ಕಾರಣ ರೂ. 13200/-ಗಳ ಕನಿಷ್ಠ ವೇತನ ಜಾರಿಯಾಗಿರುವುದಿಲ್ಲ. |
| (ಇ) | ಕನಿಷ್ಠ ವೇತನ ನೀಡುವ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು? (ವಿವರ ನೀಡುವುದು) | ಗ್ರಾಮ ಪಂಚಾಯತಿ ಗ್ರಂಥಾಲಯಗಳಲ್ಲಿ ಗೌರಧನದ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಮೇಲ್ವಿಚಾರಕರು ಪೂರ್ಣಕಾಲಿಕ ನೌಕರರಲ್ಲದ ಕಾರಣ ಕನಿಷ್ಠ ವೇತನ ಜಾರಿಗೊಳಿಸಲು ಅವಕಾಶವಿರುವುದಿಲ್ಲ.<br><br>ಆದಾಗ್ಯೂ ಗ್ರಾಮ ಪಂಚಾಯತಿ ಗ್ರಂಥಾಲಯ ನೌಕರರಿಗೆ ಮಾಸಿಕವಾಗಿ ಕನಿಷ್ಠ ವೇತನ ರೂ.13,200/- ಪಾವತಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಗಾಗಿ ಕಳುಹಿಸಲಾಗಿತ್ತು. ಪ್ರಸ್ತುತ ನೀಡಲಾಗುತ್ತಿರುವ ಗೌರವ ಸಂಭಾವನೆಯನ್ನು ಕಾರ್ಮಿಕ ಇಲಾಖೆಯ ಕನಿಷ್ಠ ವೇತನಕ್ಕೆ ಹೋಲಿಸಲು ಸಾಧ್ಯವಿಲ್ಲ, ಇದು ಗೌರವ ಸಂಭಾವನೆ ಹಾಗೂ ಕನಿಷ್ಠ ವೇತನವು ಸಂಪೂರ್ಣ ದಿನದ (8 ಗಂಟೆಗಳ ಕಾಲ) ಕಾರ್ಯಕ್ಕೆ ಇರುತ್ತದೆ. ಗ್ರಂಥಾಲಯ ಮೇಲ್ವಿಚಾರಕರು ಗೌರವ ಸಂಭಾವನೆ ಮೇರೆಗೆ 4 ಗಂಟೆಗಳ ಕಾಲ ಕೆಲಸ ಮಾಡುತ್ತಿರುವುದರಿಂದ ಇದನ್ನು ಕಾರ್ಮಿಕ ನೀತಿಯಲ್ಲಿ ತರಲು ಸಾಧ್ಯವಿಲ್ಲವಿರುವುದಿಲ್ಲವೆಂದು ಆರ್ಥಿಕ ಇಲಾಖೆಯು ಅಭಿಪ್ರಾಯ ನೀಡಿರುತ್ತದೆ. |

ಸಂ. ಗ್ರಾಅಪ 331 ಗ್ರಾಪಂಅ 2020

(ಕೆ.ಎಸ್.ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರು